ಅಲೆಕ್ಸೇಯ್ ತೊಲ್‌ಸ್ತೋಯ್

# ಜೆಲ್ತೂಖಿನ್



## ಅಲೆಕ್ಸೇಯ್ ತೊಲ್‌ಸ್ತೋಯ್

# ಜೆಲ್ತೂಖಿನ್



ಚಿತ್ರಗಳು: ವೆನಿಯಮಿನ್ ಕೊಸ್ತೀತ್ಸಿನ್
ಅನುವಾದ: ಎಚ್.ಎಸ್. ಹರಿಶಂಕರ್




ರಾದುಗ ಪ್ರಕಾಶನ
ಮಾಸ್ಕೋ



ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.
ಬೆಂಗಳೂರು

**А. Толстой**

ЖЕЛТУХИН

*На языке каннада*

A. Tolstoy

YELLOW BEAK

*In Kannada*


ಸೋವಿಯತ್ ಒಕ್ಕೂಟದಲ್ಲಿ ಮುದ್ರಿತವಾದುದು

ISBN 5-05-002159-6



ಮರಿಹಕ್ಕಿ ಜೆಲ್ಯೂಖಿನ್ ಮನೆಯ ಮುಂದಿನ ಬಾಗಿಲಿನ ಮೆಟ್ಟಲುಗಳ ಮತ್ತು ಗೋಡೆಗಳ ನಡುವಿನ ಮೂಲೆಯಲ್ಲಿ, ಅತಿಬಿಸಿಯಾಗಿದ್ದ ಜಾಗದಲ್ಲಿ, ಹುಲ್ಲಿನ ಪೊದರಿನಲ್ಲಿ ಕುಳಿತಿತ್ತು. ತನ್ನ ಕಡೆಗೇ ಹೆಜ್ಜೆ ಹಾಕಿಕೊಂಡು ಬರುತ್ತಿದ್ದ ಹುಡುಗ ನಿಕೀತನನ್ನು ಅದು ಗಾಬರಿಯಿಂದ ನೋಡುತ್ತಿತ್ತು.

ಹಕ್ಕಿಯ ತಲೆ ಬೆನ್ನಿನ ಕಡೆಗೆ ತಿರುಗಿತ್ತು. ಉದ್ದಕ್ಕೂ ಹಳದಿ ಪಟ್ಟಿ ಇದ್ದ ಅದರ ಕೊಕ್ಕು ಅದರ ಉಬ್ಬಿದ್ದ ಎರೆ ಚೀಲದ ಮೇಲೆ ಆಸರಿಸಿತ್ತು. ಹಕ್ಕಿ ತನ್ನೆಲ್ಲ ಗರಿಗಳನ್ನೂ ಕೆದರಿಕೊಂಡಿತ್ತು, ತನ್ನ ಕಾಲುಗಳನ್ನು ಹೊಟ್ಟೆಯ ಕೆಳಗೆ ಮುದುಡಿಕೊಂಡಿತ್ತು. ನಿಕೀತ ಅದರತ್ತ ಬಾಗಿದ. ಅದು ಹುಡುಗನನ್ನು ಹೆದರಿಸುವಂತೆ ತನ್ನ ಬಾಯಿ ತೆರೆಯಿತು. ನಿಕೀತ ಅದನ್ನು ಎತ್ತಿ ತನ್ನ ಅಂಗೈ ಮೇಲೆ ಇರಿಸಿಕೊಂಡ. ಅದು ಬೂದು ಬಣ್ಣದ ಮೈನಾ ಜಾತಿಯ ಹಕ್ಕಿಯಾಗಿತ್ತು. ಇನ್ನೂ ಪುಟ್ಟ ಮರಿಯಾಗಿತ್ತು. ಬಹುಶಃ ಅದು ತನ್ನ ಗೂಡಿನಿಂದ ಹಾರಲು ಪ್ರಯತ್ನಿಸಿರಬೇಕು. ಆದರೆ ರೆಕ್ಕೆಗಳು ಇನ್ನೂ ಬಲಿತಿರದಿದ್ದುದರಿಂದ ಕೆಳಕ್ಕೆ ಬಿದ್ದಿದ್ದಿರಬೇಕು. ಹಾಗಾಗಿ ಅದು ಮೂಲೆಯಲ್ಲಿ ಅಡಗಿ ಕುಳಿತಿತ್ತು. ಭೂಮಿಯ ಮೇಲೆ ಉದುರಿ ಅಂಟಿಕೊಂಡಿದ್ದ ಡ್ಯಾಂಡಿಲೆನ್ ಗಿಡದ ಎಲೆಗಳ ಮೇಲೆ ಕಚ್ಚಿ ಕುಳಿತಿತ್ತು.

ಜೆಲ್ಯೂಖಿನ್ ಹೃದಯ ಗಾಬರಿಯಿಂದ ಹೊಡೆದುಕೊಳ್ಳುತ್ತಿತ್ತು. "ನಾನು ತಪ್ಪಿಸಿಕೊಳ್ಳುವ ಮೊದಲೇ ಇವನು ನನ್ನನ್ನು ನುಂಗಿ ಬಿಡುತ್ತಾನೋ ಏನೋ" ಎಂದದು ಯೋಚಿಸಿತು. ಹುಳುಗಳು, ನೊಣಗಳು ಮತ್ತು ಕಂಬಳಿ ಹುಳುಗಳನ್ನು ಹೇಗೆ ನುಂಗುವುದು ಅನ್ನುವುದನ್ನು ಅದು ಸ್ವತಃ ತಿಳಿದಿತ್ತು.

ಹುಡುಗ ಅದನ್ನು ತನ್ನ ಬಾಯಿ ಹತ್ತಿರ ತೆಗೆದುಕೊಂಡು ಹೋದ. ಜೆಲ್ಯೂಖಿನ್ ತನ್ನ ಕರಿಯ ಕಣ್ಣುಗುಡ್ಡೆ

ಯನ್ನು ಮುಚ್ಚಿಕೊಂಡಿತು. ಗರಿಗಳ ಕೆಳಗಿದ್ದ ಅದರ ಹೃದಯ ಬಡಿಯ ತೊಡಗಿತು. ಆದರೆ ನಿಕೀತ ಅದರ ತಲೆಯ ಮೇಲೆ ಮೆಲ್ಲಗೆ ಉಸಿರು ಊದಿದ ಮಾತ್ರ ಮತ್ತು ಅದನ್ನು ಮನೆಯೊಳಗೆ ಕರೆದುಕೊಂಡು ಹೋದ. ಅಂದರೆ ಈಗಾಗಲೇ ಅವನಿಗೆ ಹೊಟ್ಟೆ ತುಂಬಿತ್ತು. ಇನ್ನು ಸ್ವಲ್ಪ ಹೊತ್ತಾದ ಮೇಲಷ್ಟೆ ಜೆಲ್ತೂಖಿನ್ ಹಕ್ಕಿಯನ್ನು ತಿನ್ನಲು ನಿರ್ಧರಿಸಿದ್ದ, ಎಂದರ್ಥ.

ಅಲೆಕ್ಸಾಂದ್ರ ಲೆಯೋಂತ್ಯೆವ್ನಳೂ ಈ ಮೈನಾ ಜಾತಿಯ ಹಕ್ಕಿಯನ್ನು ಕಂಡು ನಿಕೀತನಂತೆಯೆ ತಾನೂ ಅದನ್ನು ಅಂಗೈ ಮೇಲೆ ಇರಿಸಿಕೊಂಡು, ಅದರ ಪುಟ್ಟ ತಲೆಯ ಮೇಲೆ ಮೆಲ್ಲಗೆ ಉಸಿರು ಊದಿದಳು.

"ಇನ್ನೂ ಪುಟಾಣಿ ಮರಿ, ಪಾಪ! ಎಷ್ಟು ಹಳದಿಯಾಗಿದೆ, – ಜೆಲ್ತೂಖಿನ್*" ಎಂದು ಅವಳು ಹೇಳಿದಳು.

ಈ ಹಕ್ಕಿಯನ್ನು ತೆಗೆದುಕೊಂಡು ಹೋಗಿ ತೋಟದ ಕಡೆಗೆ ತೆರೆಯುತ್ತಿದ್ದ ಕಿಟಕಿಯ ಅಡಿಹಲಗೆಯ ಮೇಲೆ ಇರಿಸಿದರು. ಆ ಕಿಟಕಿಯ ಸುತ್ತಲೂ ನವಿರುಜಾಲರಿ ಇತ್ತು. ಕೊಠಡಿಯ ಕಡೆಗೆ ತೆರೆಯುತ್ತಿದ್ದ ಕಡೆಯೂ ಕಿಟಕಿಗೆ ಅರ್ಧದಷ್ಟು ನವಿರುಜಾಲರಿ ಹಾಕಿದ್ದರು. ಜೆಲ್ತೂಖಿನ್ ಈಗಲೂ ಮೂಲೆಯಲ್ಲಿ ಅಡಗಿ ಕುಳಿತುಕೊಂಡಿತ್ತು, ತನ್ನ ಪ್ರಾಣವನ್ನು ಅಷ್ಟು ಅಗ್ಗವಾಗಿ ಮಾರಿಕೊಳ್ಳುವುದಿಲ್ಲ ಎಂದು ತೋರಿಸಲು ಪ್ರಯತ್ನಿಸುತ್ತಿದ್ದಿತೋ, ಅನ್ನುವಂತೆ.

ಕಿಟಕಿಯ ಹೊರಗೆ ಬಿಳಿಯ ನವಿರುಜಾಲರಿಯ ಆಚೆ ಎಲೆಗಳು ಮರ್ಮರ ಶಬ್ದ ಮಾಡುತ್ತಿದ್ದವು, ಪೊದೆಯ ಮೇಲೆ ತುಚ್ಛೀಕಾರದ ಗುಬ್ಬಚ್ಚಿಗಳು – ಕಳ್ಳ ಹಕ್ಕಿಗಳು, ಧೂರ್ತ ಹಕ್ಕಿಗಳು – ಕಚ್ಚಾಡುತ್ತಿದ್ದವು. ಮತ್ತೊಂದು ಕಡೆಯೂ ನವಿರುಜಾಲರಿಯಾಚೆ, ನಿಕೀತ ನಿಂತು ನೋಡುತ್ತಿದ್ದ. ಅವನ ಕಣ್ಣುಗಳು ದೊಡ್ಡವಾಗಿದ್ದವು, ಅವು ಅತ್ತ ಇತ್ತ ಹೊರಳುತ್ತಿದ್ದವು, ಅರ್ಥವಾಗದಂತಿದ್ದವು, ಮೋಹಕವಾಗಿದ್ದವು. "ನಾನು ಕೆಟ್ಟೆ, ಕೆಟ್ಟೆ" ಎಂದುಕೊಂಡಿತು ಜೆಲ್ತೂಖಿನ್.

ಆದರೆ ನಿಕೀತ ಸಂಜೆಯವರೆಗೂ ಅದನ್ನು ತಿನ್ನಲಿಲ್ಲ, ನವಿರುಜಾಲರಿಯಾಚೆಯಿಂದ ನೊಣಗಳನ್ನು ಮತ್ತು ಹುಳುಗಳನ್ನು ಮಾತ್ರ ತಂದು ಹಾಕುತ್ತಿದ್ದ. "ತಿನ್ನಿಸಿ ಕೊಬ್ಬಿಸುತ್ತಾರೆ" ಎಂದುಕೊಂಡಿತು ಜೆಲ್ತೂಖಿನ್, ಕಣ್ಣಿಲ್ಲದ ಕೆಂಪು ಹುಳುವನ್ನು ಓರೆಗಣ್ಣಿನಿಂದ ನೋಡುತ್ತಾ. ಹಾವಿನಂತೆ ಈ ಹುಳು ಅದರ ಮೂಗಿನೆದುರು ಸುರುಳಿಸುತ್ತಿಕೊಂಡಿದೆ. "ಇದನ್ನು ನಾನು ತಿನ್ನುವುದಿಲ್ಲ. ಈ ಹುಳು ನಿಜವಾದುದಲ್ಲ, ಮೋಸದ್ದು."

ಸೂರ್ಯ ಎಲೆಗಳಾಚೆ ಮುಳುಗಿದ. ಬೂದಿ ಬಣ್ಣದ, ಮಂಪರು ಬರಿಸುವ ಬೆಳಕು ಅದರ ಕಣ್ಣುಗಳನ್ನು ಆವರಿಸಿತು. ಜೆಲ್ತೂಖಿನ್ ಇನ್ನೂ ಬಲವಾಗಿ ಕಿಟಕಿಯ ಅಡಿಹಲಗೆಯನ್ನು ತನ್ನ ಕಾಲುಗುರುಗಳಿಂದ ಹಿಡಿದುಕೊಂಡಿತು. ಈಗಾಗಲೇ ಅದರ ಕಣ್ಣಿಗೆ ಏನೂ ಕಾಣಿಸುತ್ತಿಲ್ಲ. ತೋಟದಲ್ಲಿ ಹಕ್ಕಿಗಳು ನಿಶ್ಶಬ್ದವಾಗಿವೆ. ಮಂಪರು, ಒದ್ದೆ ಹುಲ್ಲಿನ ಸುಮಧುರ ವಾಸನೆ. ಅದರ ತಲೆ ಇನ್ನೂ ಆಳವಾಗಿ ಗರಿಗಳೊಳಗೆ ಹುದುಗಿದೆ. ಏನಾದರೂ ಆಗಲಿ ಎಂದು ಜೆಲ್ತೂಖಿನ್ ಕೋಪದಿಂದ ಗರಿಗಳನ್ನು ನಿಮಿರಿಸಿ, ಸ್ವಲ್ಪ ಮುಂದೆ ಸರಿದು, ಆಮೇಲೆ ತೋಕೆಯ ಮೇಲೆ ಕುಳಿತು ನಿದ್ದೆ ಹೊಡೆಯಿತು.

ಲಿಲಿ ಹೂಗಿಡಗಳ ಕೊಂಬೆಯ ಮೇಲಿದ್ದ ಗುಬ್ಬಚ್ಚಿಗಳು ತಮ್ಮ ಕಿರುಚಾಟದಿಂದ ಇದನ್ನು ಎಚ್ಚರಗೊಳಿಸಿದವು. ಮಬ್ಬೆಳಕಿನಲ್ಲಿ ಒದ್ದೆ ಎಲೆಗಳು ತೊನೆದಾಡುತ್ತಿದ್ದವು. ದೂರದಲ್ಲಿ ಮೈನಾ ಜಾತಿಯ ಹಕ್ಕಿ ಮಧುರವಾಗಿ, ನಲಿಯುತ್ತ ಶಬ್ದ ಮಾಡುತ್ತಿತ್ತು, ಶಿಳ್ಳೆ ಹೊಡೆಯುತ್ತಿತ್ತು. "ಶಕ್ತಿಯೇ ಇಲ್ಲ, ತಿನ್ನಲು ಆಸೆಯಾಗುತ್ತಿದೆ, ವಾಕರಿಕೆಯೂ ಬರುತ್ತಿದೆ" ಎಂದುಕೊಂಡಿತು ಜೆಲ್ತೂಖಿನ್. ಕಿಟಕಿಯ ಅಡಿಹಲಗೆಯ ಬಿರುಕನ್ನು ಅರ್ಧದಷ್ಟು ಹತ್ತಿದ್ದ ಹುಳುವನ್ನು

---

*ಜೆಲ್ತೂಖಿನ್ ಅಂದರೆ ರಷ್ಯನ್ ಭಾಷೆಯಲ್ಲಿ ಹಳದಿ ಬಣ್ಣದ್ದು ಎಂದರ್ಥ. – ಸಂ.




ಕಂಡು ಅದರ ಮೇಲೆ ಬಿದ್ದು ಅದನ್ನು ಕುಕ್ಕಿ ಹೊರಗೆಳೆದು ನುಂಗಿತು. "ಪರವಾಗಿಲ್ಲ, ಹುಳು ಬಹಳ ರುಚಿಯಾಗಿದೆ."

ಬೆಳಕು ಪ್ರಖರವಾಗುತ್ತ ಬಂತು. ಪಕ್ಷಿಗಳು ಹಾಡ ತೊಡಗಿದವು. ಎಲೆಗಳ ಮೂಲಕ ಜೆಲ್ಯೂಖಿನ್ ಮೇಲೆ ಬೆಚ್ಚನೆಯ ಪ್ರಕಾಶಮಾನವಾದ ಸೂರ್ಯನ ಕಿರಣ ಬಿತ್ತು. "ಇನ್ನೂ ಬದುಕಿರಬಹುದು" ಎಂದು ಹೇಳಿಕೊಂಡು ಜೆಲ್ಯೂಖಿನ್ ನೆಗೆದು, ನೊಣವನ್ನು ಕುಕ್ಕಿ ನುಂಗಿತು.

ಆ ಸಮಯದಲ್ಲೇ ಕಾಲಿನ ಭಾರಿ ಸಪ್ಪಳ ಕೇಳಿಸಿತು. ನಿಕೀತ ಹತ್ತಿರ ಬಂದ. ತನ್ನ ಧಡೂತಿ ಕೈಯಿಂದ ನವಿರು ಜಾಲರಿಯನ್ನು ಬಲವಾಗಿ ತಳ್ಳಿ ಮುಷ್ಟಿಯಲ್ಲಿ ಹಿಡಿದಿದ್ದ ನೊಣಗಳನ್ನು ಮತ್ತು ಹುಳುಗಳನ್ನು ಕಿಟಕಿಯ ಅಡಿ ಹಲಗೆಯ ಮೇಲೆ ಬಿಟ್ಟ. ಜೆಲ್ಯೂಖಿನ್ ಗಾಬರಿಯಿಂದ ಮೂಲೆಯಲ್ಲಿ ಅಡಗಿ ತನ್ನ ರೆಕ್ಕೆಗಳನ್ನು ಹರಡಿ ಅವನ ಕೈಯನ್ನು ದೃಷ್ಟಿಸಿತು. ಅದು ಅದರ ತಲೆಯ ಮೇಲೆ ಸ್ವಲ್ಪ ಹೊತ್ತು ತೂಗಿ ನಿಂತಿದ್ದು, ಆಮೇಲೆ ನವಿರು ಜಾಲರಿಯ ಹಿಂದಕ್ಕೆ ಸರಿಯಿತು. ಮತ್ತೆ ವಿಚಿತ್ರವಾದ, ನುಂಗಲೆತ್ನಿಸುತ್ತಿದ್ದ, ಕೆಕ್ಕರಿಸುತ್ತಿದ್ದ ಕಣ್ಣುಗಳು ಜೆಲ್ಯೂಖಿನ್ ಹಕ್ಕಿಯನ್ನು ದಿಟ್ಟಿಸಿ ನೋಡುತ್ತಿದ್ದವು.

ನಿಕೀತ ಹೊರಟುಹೋದ ಮೇಲೆ ಜೆಲ್ಯೂಖಿನ್ ಮೊದಲಿನಂತೆ ಸರಿಯಾಯಿತು. ಅದು ಯೋಚಿಸಲಾರಂಭಿಸಿತು: "ಅವನು ನನ್ನನ್ನು ತಿನ್ನಲಿಲ್ಲ: ಆದರೆ ತಿನ್ನಬಹುದಾಗಿತ್ತು. ಅಂದರೆ ಅವನು ಹಕ್ಕಿಗಳನ್ನು ತಿನ್ನುವುದಿಲ್ಲ ಎಂದರ್ಥ. ಅಂದ ಮೇಲೆ ಇನ್ನು ಹೆದರಬೇಕಾಗಿಲ್ಲ."

ಜೆಲ್ತೂಖಿನ್ ಹೊಟ್ಟೆ ತುಂಬ ತಿಂದಿತು, ತನ್ನ ಕೊಕ್ಕಿನಿಂದ ಗರಿಗಳನ್ನು ಶುಭ್ರಗೊಳಿಸಿಕೊಂಡಿತು. ಕಿಟಕಿಯ ಅಡಿಹಲಗೆಯುದ್ದಕ್ಕೂ ಕುಪ್ಪಳಿಸಿಕೊಂಡು ಹೋಯಿತು, ಗುಬ್ಬಚ್ಚಿಗಳನ್ನು ನೋಡುತ್ತ. ಆ ಪೈಕಿ ಹರಿದ ಹಿಂದಲೆಯುಳ್ಳ ಒಂದು ಮುದಿ ಗುಬ್ಬಚ್ಚಿ ಕಣ್ಣಿಗೆ ಬಿತ್ತು. ಆ ಗುಬ್ಬಚ್ಚಿಯನ್ನು ಇದು ಛೇಡಿಸಲು ಪ್ರಾರಂಭಿಸಿತು. ತಲೆದೂಗಿ ಅದನ್ನು ರೇಗಿಸಿತು, ಶಿಳ್ಳೆ ಹಾಕಿತು: ಫ್ಯುತ್, ಚಿಲಿಕ್-ಚಿಲಿಕ್, ಫ್ಯುತ್. ಗುಬ್ಬಚ್ಚಿಗೆ ರೇಗಿತು. ಅದೂ ಪ್ರತಿಯಾಗಿ ಗರಿಗಳನ್ನು ಕೆದರಿಕೊಂಡು, ಕೊಕ್ಕು ತೆರೆದುಕೊಂಡು, ಜೆಲ್ತೂಖಿನ್ ಕಡೆಗೆ ನುಗ್ಗಿತು, ಆದರೆ ನವಿರುಜಾಲರಿಗೆ ಡಿಕ್ಕಿ ಹೊಡೆಯಿತು.

"ಏನು ಸಾಕಾ? ಹಾಗೇ ಆಗಬೇಕು ನಿನಗೆ!" ಎಂದು ಜೆಲ್ತೂಖಿನ್ ಅಂದುಕೊಂಡಿತು ಹಾಗೂ ನಿಧಾನವಾಗಿ, ಜಂಭದಿಂದ ಕಿಟಕಿಯ ಅಡಿಹಲಗೆಯ ಮೇಲೆ ನಡೆಯ ತೊಡಗಿತು.

ಅನಂತರ ನಿಕೀತ ಮತ್ತೆ ಕಾಣಿಸಿಕೊಂಡ. ಕೈಹಾಕಿದ. ಆದರೆ ಈ ಬಾರಿ ಖಾಲಿ ಕೈ. ಕೈಯನ್ನು ಬಹಳ ಹತ್ತಿರ ಎತ್ತಿ ಹಿಡಿದ. ಜೆಲ್ತೂಖಿನ್ ನೆಗೆಯಿತು, ತನ್ನೆಲ್ಲ ಶಕ್ತಿಯಿಂದ ಅವನ ಬೆರಳನ್ನು ಕುಕ್ಕಿತು, ಪಕ್ಕಕ್ಕೆ ನೆಗೆದು, ಕಾಳಗಕ್ಕೆ ಸಿದ್ಧವಾಯಿತು. ಆದರೆ ನಿಕೀತ ತನ್ನ ಬಾಯಿ ಮಾತ್ರ ಕಿಸಿದು ಗಟ್ಟಿಯಾಗಿ ಅರಚಿದ: ಹ್ಹ-ಹ್ಹ-ಹ್ಹ.

ಆ ದಿನ ಹಾಗೆ ಕಳೆಯಿತು. ಹೆದರಿಕೊಳ್ಳಲು ಏನೂ ಇರಲಿಲ್ಲ. ಊಟ ಚೆನ್ನಾಗಿತ್ತು. ಆದರೆ ಬೇಸರ ತರುತ್ತಿತ್ತು. ರಾತ್ರಿಯಾಗುವುದನ್ನೇ ನಿರೀಕ್ಷಿಸಿ ಜೆಲ್ತೂಖಿನ್ ರಾತ್ರಿ ಪೂರ್ಣ ಸಂತೋಷದಿಂದ ನಿದ್ರಿಸಿತು.

ಮರುದಿನ ಬೆಳಿಗ್ಗೆ ಊಟ ಮಾಡಿ ಆ ನವಿರುಜಾಲರಿಯಿಂದ ಹೊರಗೆ ಹೇಗೆ ಹೋಗಬಹುದು ಎಂದು ಕಿಟಕಿಯಲ್ಲೆಲ್ಲ ಸುತ್ತು ಹಾಕಿತು. ಆದರೆ ಎಲ್ಲೂ ಹೊರಹೋಗಲು ರಂಧ್ರ ಕಾಣಿಸಲಿಲ್ಲ. ಆಮೇಲೆ ಅದು ತಟ್ಟೆಯ ಸಮೀಪ ಬಂದು ನೀರು ಕುಡಿಯಲಾರಂಭಿಸಿತು. ತನ್ನ ಕೊಕ್ಕಿನಲ್ಲಿ ನೀರು ತುಂಬಿಕೊಂಡು ತಲೆ ಓರೆಮಾಡುತ್ತಿತ್ತು, ನುಂಗುತ್ತಿತ್ತು –ಗಂಟಲಲ್ಲಿ ಒಂದು ಪುಟ್ಟ ಉಂಡೆ ಹೊರಳುತ್ತಿತ್ತು.

ಹಗಲು ಸುದೀರ್ಘವೆನಿಸಿತು. ನಿಕೀತ ಹುಳುಗಳನ್ನು ತರುತ್ತಿದ್ದ. ಬಾತುಕೋಳಿ ಪುಕ್ಕದ ಪರಕೆಯಿಂದ ಕಿಟಕಿ ಅಡಿಹಲಗೆಯನ್ನು ಶುಭ್ರಗೊಳಿಸಿದನು. ಅದಾದ ಸ್ವಲ್ಪ ಹೊತ್ತಿನ ಮೇಲೆ ಬೊಕ್ಕ ತಲೆಯ ಗುಬ್ಬಚ್ಚಿ ಕಾಗೆಯೊಂದಿಗೆ





ಜಗಳಕ್ಕೆ ಬಂತು. ಕಾಗೆ ಅದಕ್ಕೆ ಎಂಥ ಏಟು ಕೊಟ್ಟಿತೆಂದರೆ ಅದು ಎಲೆಗಳ ಮಧ್ಯೆ ತೂರಿಕೊಂಡು ಹೋಯಿತು. ಅಲ್ಲಿಂದ ಅದು ಗರಿಗಳನ್ನು ಕೋಪದಿಂದ ಕೆದರಿಕೊಂಡು ನೋಡುತ್ತಿತ್ತು.

ಆಮೇಲೆ ಮ್ಯಾಗ್‌ಪೈ ಹಕ್ಕಿ ಅದೇ ಕಿಟಕಿಯ ಬಳಿಗೆ ಹಾರಿ ಬಂತು. ಚಿಲಿಪಿಲಿಗುಟ್ಟಿತು, ಗೊಂದಲ ಮಾಡಿತು, ತನ್ನ ಬಾಲವನ್ನು ಅಲ್ಲಾಡಿಸಿತು, ವಿವೇಕವಾದದ್ದೇನೂ ಮಾಡಲಿಲ್ಲ.

ರಾಬಿನ್ ಪಕ್ಷಿ ಬಹಳ ಹೊತ್ತು ಇಂಪಾದ ಸ್ವರದಲ್ಲಿ ಸೂರ್ಯನ ಬೆಚ್ಚಗಿನ ಬೆಳಕಿನ ಬಗ್ಗೆ ಮತ್ತು ಜೇನಿನಂತೆ ಸವಿಯಾದ ಕ್ಲೋವರ್ ಎಲೆಗಳ ಬಗ್ಗೆ ಹಾಡಿತು. ಅದನ್ನು ಕೇಳಿ ಜೆಲ್ಲೂಖಿನ್‌ಗೆ ದುಃಖವೇ ಆಯಿತು, ಅದರ ಗಂಟಲು ಗೊಗ್ಗರು ಧ್ವನಿಯಿಂದ ಕೂಡಿತು, ಹಾಡಲು ಇಚ್ಛಿಸಿತು. ಆದರೆ ಎಲ್ಲಿ ಹಾಡಬೇಕು? ಕಿಟಕಿಯಲ್ಲಲ್ಲ, ನವಿರು ಜಾಲರಿಯ ಹಿಂದೆ !...

ಅದು ಮತ್ತೆ ಕಿಟಕಿಯ ಅಡಿಹಲಗೆಯ ಉದ್ದಕ್ಕೂ ನಡೆಯಿತು. ಭಯಂಕರ ಪ್ರಾಣಿಯೊಂದು ಅದರ ಕಣ್ಣಿಗೆ ಬಿತ್ತು: ಅದು ನಡೆಯುತ್ತಿತ್ತು, ತನ್ನ ಮೃದುವಾದ ಗಿಡ್ಡ ಪಂಜಗಳ ಮೇಲೆ ನುಸುಳಿಕೊಂಡು ಬರುತ್ತಿತ್ತು, ನೆಲದ

ಮೇಲೆ ತೆವಳುತ್ತಿತ್ತು. ಅದರ ತಲೆ ದುಂಡಗಿತ್ತು, ಬಿರುಗೂದಲ ಮೀಸೆಗಳು, ಹಸಿರು ಕಣ್ಣುಗಳು. ಇಕ್ಕಟ್ಟಾದ ಕಣ್ಣಿನ ಪಾಪೆಗಳು ದೆವ್ವದಂತೆ ಕೋಪದಿಂದ ಉರಿಯುತ್ತಿದ್ದವು. ಜೆಲ್ಯೂಖಿನ್ ಹಾಗೇ ಕದಲದಂತೆ ಕುಳಿತು ಕೊಂಡಿತು.

ಬೆಕ್ಕು ವಸೀಲಿ ವಸೀಲ್ಯೆವಿಚ್ ಸಪ್ಪಳ ಮಾಡದೆ ನೆಗೆದು ತನ್ನ ಉದ್ದನೆಯ ಉಗುರುಗಳಿಂದ ಕಿಟಕಿ ಅಡಿಹಲಗೆಯ ತುದಿಯನ್ನು ಕೆರೆಯಿತು. ನವಿರುಜಾಲರಿಯ ಮೂಲಕ ಜೆಲ್ಯೂಖಿನ್ ಹಕ್ಕಿಯನ್ನು ನೋಡಿ ಬಾಯಿ ತೆರೆಯಿತು... ಅಯ್ಯೋ ದೇವರೆ... ಅದರ ಬಾಯಿಯಲ್ಲಿ ಜೆಲ್ಯೂಖಿನ್ ಕೊಕ್ಕಿಗಿಂತ ಉದ್ದವಾದ ಹಲ್ಲುಗಳು ಮುಂದೆ ಚಾಚಿದ್ದವು... ತನ್ನ ಗಿಡ್ಡ ಪಂಜದಿಂದ ಬೆಕ್ಕು ಹೊಡೆಯಿತು, ನವಿರುಜಾಲರಿಯನ್ನು ಹರಿಯಿತು... ಜೆಲ್ಯೂಖಿನ್ ಹೃದಯ ಬಡಿದು ಕೊಳ್ಳ ತೊಡಗಿತು, ಅದರ ರೆಕ್ಕೆಗಳು ಮುದುಡಿದವು... ಆ ಸಮಯಕ್ಕೆ ಸರಿಯಾಗಿ, ಎಂದರೆ ಬಹಳ ಸಕಾಲದಲ್ಲಿ, ನಿಕೀತ ಕಾಣಿಸಿಕೊಂಡ. ಬೆಕ್ಕಿನ ಬೆನ್ನಿನ ಚರ್ಮವನ್ನು ಹಿಡಿದೆತ್ತಿ ಬೆಕ್ಕನ್ನು ಬಾಗಿಲ ಕಡೆ ಒಗೆದ. ವಸೀಲಿ ವಸೀಲ್ಯೆವಿಚ್ ನೊಂದ ಧ್ವನಿಯಲ್ಲಿ ಅರಚಿತು, ಬಾಲ ಎಳೆದುಕೊಂಡು ಓಡಿತು.

"ನಿಕೀತನಿಗಿಂತ ಹೆಚ್ಚು ಬಲಶಾಲಿಯಾದ ಮೃಗ ಇಲ್ಲ" ಎಂದು ಈ ಪ್ರಸಂಗದ ನಂತರ ಜೆಲ್ಯೂಖಿನ್ ಆಲೋ





ಚಿಸಿತು. ಇನ್ನೊಮ್ಮೆ ನಿಕೀತ ಅದರ ಹತ್ತಿರ ಬಂದಾಗ, ಭಯದಿಂದಲೇ ತೋಕೆಯ ಮೇಲೆ ಕುಳಿತಿದ್ದರೂ ಅದು ತನ್ನ ತಲೆಯನ್ನು ನೇವರಿಸಲು ನಿಕೀತನಿಗೆ ಅನುಮತಿ ನೀಡಿತು.

ಆ ದಿನವೂ ಮುಗಿಯಿತು. ಬೆಳಿಗ್ಗೆ ಅತ್ಯಂತ ಹರ್ಷದಿಂದಿದ್ದ ಜೆಲ್ತೂಖಿನ್ ಮತ್ತೆ ತನ್ನ ಮನೆಯ ವೀಕ್ಷಣೆ ಮಾಡಲು ಹೊರಟಿತು. ಬೆಕ್ಕು ತನ್ನ ಪಂಜಗಳಿಂದ ನವಿರುಜಾಲರಿಯನ್ನು ಹರಿದಿದ್ದ ಜಾಗದಲ್ಲಿ ಒಂದು ಕಿಂಡಿಯನ್ನು ಅದು ಕೂಡಲೇ ಕಂಡಿತು. ಜೆಲ್ತೂಖಿನ್ ಅಲ್ಲಿ ತನ್ನ ತಲೆಯನ್ನು ತೂರಿಸಿ, ಸುತ್ತ ನೋಡಿತು, ಹೊರಗಡೆ ಹಾರಿ ತಂಗಾಳಿಗೆ ಧುಮುಕಿತು. ತನ್ನ ಪುಟ್ಟ ರೆಕ್ಕೆಗಳಿಂದ ನಡುಗುತ್ತಾ ಮೆಲ್ಲಮೆಲ್ಲನೆ ನೆಲದ ಮೇಲೆಯೇ ಕುಪ್ಪಳಿಸಿತು.

ಬಾಗಿಲ ಹತ್ತಿರ ಅದು ತಲೆ ಎತ್ತಿ ನೋಡಿತು. ಎರಡನೆಯ ಕೋಣೆಯಲ್ಲಿ ದುಂಡು ಮೇಜಿನ ಸುತ್ತ ನಾಲ್ಕು ಮಂದಿ ಕುಳಿತಿರುವುದನ್ನು ಕಂಡಿತು. ಅವರು ತಿನ್ನುತ್ತಿದ್ದರು. ದೊಡ್ಡ ತುಂಡುಗಳನ್ನು ಕೈಯಲ್ಲಿ ತೆಗೆದುಕೊಂಡು ಬಾಯಲ್ಲಿ ಇಟ್ಟುಕೊಳ್ಳುತ್ತಿದ್ದರು. ಆ ನಾಲ್ವರೂ ತಮ್ಮ ತಲೆಗಳನ್ನು ತಿರುಗಿಸಿ ಮಿಸುಕಾಡದೆ ಜೆಲ್ತೂಖಿನ್‌ನನ್ನು ದೃಷ್ಟಿಸಿ ನೋಡುತ್ತಿದ್ದರು. ತಾನು ಗಾಳಿಯಲ್ಲಿ ಹಾಗೆಯೇ ನಿಂತಿರಬೇಕು, ಹಿಂದಕ್ಕೆ ತಿರುಗಬೇಕು, ಎಂಬುದು ಅದಕ್ಕೆ ಅರ್ಥವಾಯಿತು. ಆದರೆ ಹಾರುತ್ತ ತಿರುಗುವುದು ಕಷ್ಟವಾದದ್ದರಿಂದ ಇದಕ್ಕೆ ಸಾಧ್ಯವಾಗಲಿಲ್ಲ. ಕೆಳಗೆ ರೆಕ್ಕೆಯ ಮೇಲೆ ಬಿತ್ತು, ಹಿಂದಿರುಗಿ ಮೇಜಿನ ಮೇಲೆ ಜಾಮ್ ಮತ್ತು ಸಕ್ಕರೆ ಜಾಡಿಗಳ ಮಧ್ಯೆ ಕುಳಿತಿತು... ಕೂಡಲೇ ಅದು ತನ್ನ ಮುಂದೆ ನಿಕೀತನನ್ನು ನೋಡಿತು. ಆಗ ಜೆಲ್ತೂಖಿನ್ ಹಿಂದು ಮುಂದು ನೋಡದೆ ಜಾಡಿಯ ಮೇಲೆ ಕುಪ್ಪಳಿಸಿ ಅಲ್ಲಿಂದ ನಿಕೀತನ ಭುಜದ ಮೇಲೆ ಹಾರಿ ಹೋಗಿ ಗರಿಗಳನ್ನು ಕೆದರಿಕೊಂಡು ಕಣ್ಣುಗಳನ್ನು ಅರ್ಧ ಮುಚ್ಚಿಕೊಂಡು ಕುಳಿತಿತು.

ನಿಕೀತನ ಭುಜದ ಮೇಲೆ ಕುಳಿತು ಜೆಲ್ತೂಖಿನ್ ಛಾವಣಿಗೆ ಹಾರಿ ನೊಣವನ್ನು ಹಿಡಿಯಿತು, ಮೂಲೆಯಲ್ಲಿ




ಫೈಕಸ್ ಬಳ್ಳಿಯ ಮೇಲೆ ಕುಳಿತಿತು, ತೂಗುದೀಪದ ಕೆಳಗೆ ಸುತ್ತು ಹಾಕಿತು. ಆಮೇಲೆ ಹಸಿವಾದ್ದರಿಂದ ತನ್ನ ಕಿಟಕಿಯತ್ತ ಹಾರಿತು. ಅಲ್ಲಿ ತಾಜಾ ಹುಳುಗಳನ್ನು ಇದಕ್ಕೆ ಸಿದ್ಧಮಾಡಿ ಇರಿಸಲಾಗಿತ್ತು.

ಸಾಯಂಕಾಲದ ವೇಳೆಗೆ ನಿಕೀತ ಮರದ ಸಣ್ಣ ಮನೆಯನ್ನು ನಿರ್ಮಿಸಿ ಕಿಟಕಿಯ ಅಡಿಹಲಗೆಯ ಮೇಲೆ ತಂದಿಟ್ಟನು. ಅದಕ್ಕೆ ಮುಖಮಂಟಪ ಹಾಗೂ ಎರಡು ಕಿಟಕಿಗಳು ಇದ್ದವು. ಒಳಗಡೆ ಕತ್ತಲಿದ್ದುದರಿಂದ ಜೆಲ್ತೂಖಿನ್‌ಗೆ ಸಂತೋಷವಾಯಿತು. ಒಳಗೆ ಕುಪ್ಪಳಿಸಿಕೊಂಡು ಹೋಯಿತು. ಪಕ್ಕಕ್ಕೆ ಹೊರಳಿಕೊಂಡು ಮಲಗಿ ಅದು ನಿದ್ದೆಹೋಯಿತು.

ಆ ರಾತ್ರಿಯೇ ಹಲ್ಲೆ ಮಾಡಲು ಯತ್ನಿಸಿದ ಕಾರಣದಿಂದ ಉಗ್ರಾಣದ ಕೋಣೆಯಲ್ಲಿ ಬೀಗ ಹಾಕಿದ ಬೆಕ್ಕು ವಸೀಲಿ ವಸೀಲ್ಯೆವಿಚ್ ಒಡೆದ ಗಂಟಲಿಂದ ಮ್ಯಾವ್ ಎಂದು ಅರಚಿತು. ಇಲಿಗಳನ್ನು ಹಿಡಿಯುವುದು ಕೂಡ ಅದಕ್ಕೆ ಇಷ್ಟವಿರಲಿಲ್ಲ. ಬಾಗಿಲ ಬಳಿ ಕುಳಿತು ಮ್ಯಾವ್ ಮ್ಯಾವ್ ಎಂದು ಅರಚಿತು. ಹೇಗೆ ಅರಚುತ್ತಿತ್ತೆಂದರೆ ಆ ಅರಚಾಟ ಅದಕ್ಕೂ ಪ್ರಿಯವಾಗಿರಲಿಲ್ಲ.

ಹಾಗೆಯೇ ಆ ಮನೆಯಲ್ಲಿ ಬೆಕ್ಕು ಮತ್ತು ಮುಳ್ಳುಹಂದಿಗಳಲ್ಲದೆ ಮೂರನೆಯ ಪ್ರಾಣಿಯೊಂದೂ – ಜೆಲ್ಲೂಖಿನ್ – ವಾಸಿಸಲಾರಂಭಿಸಿತು. ಅದಕ್ಕೆ ಸ್ವಾತಂತ್ರ್ಯವಿತ್ತು, ಅದು ಬುದ್ಧಿವಂತ ಹಕ್ಕಿಯಾಗಿತ್ತು, ಅದು ಚಟುವಟಿಕೆಯಿಂದ ಕೂಡಿತ್ತು. ಜನರು ಹೇಗೆ ಮಾತಾಡುತ್ತಾರೆ ಎಂದು ಕೇಳುವುದು ಅದಕ್ಕೆ ಇಷ್ಟವಾಗಿತ್ತು. ಅವರು ಮೇಜಿನ ಸುತ್ತ ಕುಳಿತಿದ್ದಾಗ ಅವರ ಮಾತನ್ನು ಆಲಿಸಿ ತನ್ನ ತಲೆ ವಾಲಿಸಿ ಸುಮಧುರ ಧ್ವನಿಯಿಂದ "ಸಾಷ" ಎಂದು ಹೇಳಿ ಬಾಗುತ್ತಿತ್ತು. ಅದು ತನ್ನ ಕಡೆಗೇ ಬಾಗುತ್ತಿರುವುದು ಎಂದು ಅಲೆಕ್ಸಾಂದ್ರ ಲೆಯೋಂತ್ಯೆವ್ನ ಎಲ್ಲರಿಗೂ ಹೇಳಿದಳು. ಜೆಲ್ಲೂಖಿನ್ನನ್ನು ನೋಡಿದಾಗಲೆಲ್ಲ "ಏನು, ಏನು ಬೂದು ಬಣ್ಣದ ಉತ್ಸಾಹದ ಚಿಲುಮೆ" ಎಂದು ಅಮ್ಮ ಉದ್ಗರಿಸುತ್ತಿದ್ದಳು. ಆ ಕೂಡಲೇ ಜೆಲ್ಲೂಖಿನ್ ನೆಲದ ಮೇಲೆ ಇಳಿಬಿದ್ದಿದ್ದ ಅವಳ ಲಂಗದ ಅಂಚಿನ ಮೇಲೆ ಹಾರಿ ಕುಳಿತು ಸಂತೋಷದಿಂದ ಅವಳ ಹಿಂದೆಯೇ ಹೋಗುತ್ತಿತ್ತು.

ಹೀಗೆ ಶರತ್ಕಾಲದ ವರೆಗೂ ಅದು ಕಾಲ ಕಳೆಯಿತು, ಬೆಳೆಯಿತು. ಕಪ್ಪು ಹಕ್ಕಿಯಾಗಿ ರೂಪುಗೊಂಡಿತು. ಅದರ ರೆಕ್ಕೆಯ ಗರಿಗಳು ಕಾಗೆಯ ಪುಕ್ಕಗಳಂತೆ ಬಲಿತವು. ಅದು ರಷ್ಯನ್ ಮಾತನಾಡುವುದನ್ನು ಚೆನ್ನಾಗಿ ಕಲಿಯಿತು. ಅದು ದಿನದ ಬಹುಭಾಗವನ್ನೆಲ್ಲ ತೋಟದಲ್ಲಿ ಕಳೆಯುತ್ತಿತ್ತು. ಆದರೆ ಪ್ರತಿ ಮುಸ್ಸಂಜೆಯೂ ಕಿಟಕಿಯಲ್ಲಿದ್ದ ತನ್ನ ಮನೆಗೆ ಹಿಂದಿರುಗುತ್ತಿತ್ತು.

ಆಗಸ್ಟ್ ತಿಂಗಳಲ್ಲಿ ಕಾಡು ಮೈನಾ ಜಾತಿಯ ಪಕ್ಷಿಗಳು ತಮ್ಮೊಟ್ಟಿಗೆ ಇದನ್ನೂ ಕರೆದುಕೊಂಡು ಹೋಗಿ ಹಾರಾಡುವುದನ್ನು ಕಲಿಸಿದವು. ತೋಟದಲ್ಲಿ ಗಿಡಗಳ ಎಲೆಗಳು ಉದುರ ತೊಡಗಿದಾಗ ಜೆಲ್ಲೂಖಿನ್ – ಮುಂಬೆಳಗಿನಲ್ಲಿಯೇ – ವಲಸೆ ಹೋಗುವ ಹಕ್ಕಿಗಳೊಡನೆ ಸಮುದ್ರದಾಚೆ, ಆಫ್ರಿಕಾ ಖಂಡಕ್ಕೆ, ಹಾರಿಹೋಯಿತು.



